# ಶ್ರೀ ಹರಿಕಥಾಮೃತಸಾರ

ನಾಗರಾಜು ಹಾವೇರಿ, ಪಲ್ಲವೀಪ್ರಿಯ, ಬೆಂಗಳೂರು – 99010 52578

# 2. ಕರುಣಾಸಂಧಿ

ಶ್ರವಣ ಮನಕಾನಂದವೀವುದು ಭವಜನಿತ ದುಃಖಗಳ ಕಳೆವುದು
ವಿವಿಧ ಭೋಗಗಳಿಹಪರಂಗಳಲಿತ್ತು ಕಳೆವುದು ಭುವನಪಾವನನೆನಿಪ ಲಕುಮಿ
ಧವನ ಮಂಗಳ ಕಥೆಯ ಪರಮೋತ್ಸವದಿ
ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ॥ ೧ ॥

ಹರಿಕಥೆಯ ಶ್ರವಣವು ಮನಸ್ಸಿಗೆ ಆನಂದವನ್ನು ನೀಡುವುದು. ಸಂಸಾರದಿಂದ ಹುಟ್ಟುವ ತಾಪಗಳನ್ನು ಕಳೆಯುವುದು. ಬಗೆಬಗೆಯ ಭೋಗಗಳನ್ನು ಇಹಪರಗಳಲ್ಲಿ ಕೊಟ್ಟು ಪಾಲಿಸುವುದು. ಲೋಕಪಾವನವೆನ್ನಿಸುವ ಲಕ್ಷ್ಮೀಪತಿಯಾದ ಶ್ರೀಹರಿಯ ಮಂಗಳಕಥೆಯನ್ನು ಭೂಸುರರು ದಿನದಿನದಲ್ಲಿ ಪರಮೋತ್ಸವದಿಂದ ಕಿವಿಕೊಟ್ಟು ಆಲಿಸಬೇಕು.

ಮಳೆಯ ನೀರೋಣಿಯಲಿ ಪರಿಯಲು ಬಳಸರೂರೊಳಗಿದ್ದ ಜನರಾ-
ಜಲವು ಹೆದ್ದೊರೆಗೊಡೆ ಮಜ್ಜನಪಾನ ಗೈದಪರು
ಕಲುಷ ವಚನಗಳಾದರಿವು ಬಾಂಬೊಳೆಯ ಪೆತ್ತನ ಪಾದ ಮಹಿಮಾ
ಜಲಧಿ ಪೊಕ್ಕವರಿಂದ ಮಾಣ್ದಪರೇ ಮಹೀಸುರರು ॥ ೨ ॥

ಮಳೆಯ ನೀರು ಬೀದಿಯಲ್ಲಿ ಹರಿದಾಗ ಊರೊಳಗಿರುವ ಜನರು ಅದನ್ನು ಉಪಯೋಗಿಸುವುದಿಲ್ಲ. ಅದೇ ನೀರು ದೊಡ್ಡ ಪ್ರಹಾವನ್ನು ಸೇರಿಕೊಂಡರೆ, ಅದರಲ್ಲಿ ಸ್ನಾನಪಾನಗಳನ್ನು ಮಾಡುವರು. ಅದರಂತೆ ಈ ಕೃತಿಯಲ್ಲಿನ ಮಾತುಗಳು ಕಲುಷವಚನವಾದರೂ ಬಾನಿನ ಹೊಳೆಯಾದ ಗಂಗೆಯನ್ನು ಪಡೆದ ಶ್ರೀಹರಿಯ ಚರಣಮಾಹಾತ್ಮ್ಯದ ಸಾಗರವನ್ನು ಹೊಕ್ಕಿರುವದರಿಂದ ಭೂಸುರರು ಶ್ರವಣಾದಿಗಳನ್ನು ಮಾಡದಿರುವರೇ? ಖಂಡಿತವಾಗಿ ಶ್ರವಣಾದಿಗಳು ಮಾಡುವರೆಂದು ಇದರ ಅರ್ಥ.

ಶೃತಿತತಿಗಳಿಗಭಿಮಾನಿ ಲಕುಮೀಸ್ತುತಿಗಳಿಗೆ ಗೋಚರಿಸದಪ್ರತಿ-
ಹತ ಮಹೈಶ್ವರ್ಯಾದ್ಯಖಿಳಸದ್ಗುಣಗಣಾಂಭೋಧಿ
ಪ್ರತಿದಿವಸ ತನ್ನಂಘ್ರಿ ಸೇವಾರತಮಹಾತ್ಮರು ಸಂ-
ಸ್ತುತಿಗೆ ವಶನಾಗುವನಿವನ ಕಾರುಣ್ಯಕೇನೆಂಬೆ ॥ ೩ ॥

ಶ್ರೀಹರಿಯು ಶೃತಿಗಳ ಸಮೂಹಕ್ಕೆ ಅಭಿಮಾನಿಯಾದ ಮಹಾಲಕ್ಷ್ಮೀಯ ಸ್ತೋತ್ರಗಳಿಗೂ ಸಾಕಲ್ಯೇನ ಗೋಚರಿಸದವನು. ಅಡೆತಡೆಗಳಿರದ, ಮಹೈಶ್ವರ್ಯವೇ ಮೊದಲಾದ ಸಕಲ ಸದ್ಗುಣಗಳ ಗುಂಪಿಗೆ ಮಹಾಸಾಗರದಂತಿರುವವನು, ಅವನು ತನ್ನಪಾದಸೇವಾರತರಾದ ಮಹಾತ್ಮರು ಪ್ರತಿದಿವಸದಲ್ಲಿ ಮಾಡುವ ಉತ್ತಮ ಸ್ತೋತ್ರಗಳಿಗೆ ವಶನಾಗುವನು. ಇವನ ಕರುಣೆಗೆ ಏನೆನ್ನುವೆ.

ಮನವಚನಕತಿದೂರ ನೆನೆವರನನುಸರಿಸಿ ತಿರುಗುವನು ಜಾಹ್ನವಿ-
ಜನಕ ಜನರೊಳಗಿದ್ದು ಜನಿಸುವ ಜಗದುದರ ತಾನು
ಘನಮಹಿಮ ಗಾಂಗೇಯನುತ ಗಾಯನವ ಕೇಳುತ ಗಗನಚರವಾ-
ಹನ ದಿವೌಕಸರೊಡನೆ ಚರಿಸುವ ಮನೆಮನೆಗಳಲ್ಲಿ ॥ ೪ ॥

ಶ್ರೀಹರಿಯು ಮನಸ್ಸು ಮತ್ತು ಮಾತುಗಳಿಗೆ ಸಾಕಲ್ಯೇನ ಎಂದೂ ನಿಲುಕದವನು. ಆದರೆ ತನ್ನನ್ನು ನೆನೆಯುವವರನ್ನು ಅವನು ಅನುಸರಿಸಿ ತಿರುಗುವನು. ಗಂಗಾಜನಕನೂ, ಜಗತ್ತನ್ನು ಉದರದಲ್ಲಿ ಧರಿಸಿರುವವನೂ ಆದ ಅವನು ಜನರೊಳಗಿದ್ದು ಅವರೊಂದಿಗೆ ತಾನೂ ಜನಿಸುವನು. ಗಂಗಾಪುತ್ರರಾದ ಭೀಷ್ಮರಿಂದ ಸ್ತುತಿಸಲ್ಪಟ್ಟ ಅಪಾರಮಹಿಮನಾದ ಅವನು ಭಕ್ತಜನರ ಗಾಯನವನ್ನು ಕೇಳುತ್ತಾ ಗರುಡವಾಹನನಾಗಿ ದೇವತೆಗಳೊಡನೆ ಮನೆಮನೆಗಳಲ್ಲಿ ಸಂಚರಿಸುವನು.

ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ ಕುಳಿತು ಪಾಡಲು
ನಿಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ
ಸುಲಭನೋ ಹರಿ ತನ್ನವರ ನರಘಳಿಗೆ ಬಿಟ್ಟಗಲನು ರಮಾಧವ-
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ॥ ೫ ॥

ಶ್ರೀಹರಿಯು ಭಕ್ತರು ಪರಮ ಭಕ್ತಿಯಿಂದ ಮಲಗಿ ಹಾಡಿದರೆ ತಾನು ಕುಳಿತು ಕೇಳುವನು. ಕುಳಿತು ಹಾಡಿದರೆ ನಿಂತು ಕೇಳುವನು. ನಿಂತು ಹಾಡಿದರೆ ನಲಿದು ಕೇಳುವನು. ನಲಿದು ಹಾಡಿದರೆ ನಿಮಗೆ ಒಲೆಯುವೆನು ಎನ್ನುವ ಪರಮ ಕರುಣಾಳು. ಅವನು ತುಂಬಾ ಸುಲಭನು. ತನ್ನ ಭಕ್ತರನ್ನು ಒಂದರೆಘಳಿಗೆ ಸಹಾ ಬಿಟ್ಟಗಲದವನು. ಅಂತಹ ರಮಾಪತಿಯಾದ ಶ್ರೀಹರಿಯನ್ನು ಒಲಿಸಲು ಅರಿಯದೇ ಅವಿವೇಕಿ ಜನರು ಸಂಸಾರದೊಳಗೆ ಕ್ಲೇಶಪಡುವರು.

ಮನದೊಳಗೆ ತಾನಿಪ್ಪ ಮನವೆಂದೆನಿಸಿಕೊಂಬನು ಮನದ ವೃತ್ತಿಗ-
ಳನುಸರಿಸಿ ಭೋಗಂಗಳೀವನು ತ್ರಿವಿಧಚೇತನಕೆ
ಮನವನಿತ್ತರೆ ತನ್ನನೀವನು ತನುವ ದಂಡಿಸಿ ದಿನದಿನದಿ ಸಾ-
ಧನವ ಮಾಳ್ಪರಿಗಿತ್ತಪನು ಸ್ವರ್ಗಾದಿಭೋಗಗಳ ॥ ೬ ॥

ಶ್ರೀಹರಿಯು ಮನಸ್ಸಿನೊಳಗೆ ಇದ್ದು ಮನಸ್ಸು ಎಂದೆನಿಸಿಕೊಳ್ಳುವನು. ಮನಸ್ಸಿನ ಪ್ರವೃತ್ತಿಗಳನ್ನು ಅನುಸರಿಸಿ ಸಾತ್ವಿಕ, ರಾಜಸ ಮತ್ತು ತಾಮಸ ಎಂಬ ಮೂರು ವಿಧ ಚೇತನರಿಗೆ ಭೋಗಗಳನ್ನು ನೀಡುವರು. ಮನಸ್ಸನ್ನು ನೀಡಿದರೆ ತನ್ನನ್ನೇ ನೀಡುವನು. ದಿನದಿನದಲ್ಲಿ ದೇಹವ ದಂಡಿಸಿ ಸಾಧನೆ ಮಾಡುವವರಿಗೆ ಸ್ವರ್ಗಾದಿ ಭೋಗಗಳನ್ನು ಕೊಡುವನು.

ಪರಮ ಸತ್ಪುರುಷಾರ್ಥರೂಪನು ಹರಿಯು ಲೋಕಕೆ ಎಂದು
ಪರಮಾದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನ
ಮರೆದು ಧರ್ಮಾರ್ಥಗಳ ಕಾಮಿಸುವರಿಗೆ ನಗುತತಿ ಶೀಘ್ರದಿಂದಲಿ
ಸುರಪತನಯ ಸುಯೋಧನರಿಗಿತ್ತಂತೆ ಕೊಡುತಿಪ್ಪ ॥ ೭ ॥

ಲೋಕಕ್ಕೆ ಪರಮಸತ್ಪುರುಷಾರ್ಥರೂಪನೆಂದು ಪರಮ ಭಕ್ತಿಯಿಂದ ಉತ್ತಮ ಉಪಾಸನೆ ಮಾಡುವವರಿಗೆ ಶ್ರೀಹರಿಯು ತನ್ನನ್ನೇ ನೀಡುವನು. ಅದನ್ನು ಮರೆತು ಧರ್ಮ, ಅರ್ಥಗಳನ್ನು ಬಯಸುವವರಿಗೆ ನಗುತ್ತ ಅತ್ಯಂತ ಶೀಘ್ರದಿಂದ ಇಂದ್ರಪುತ್ರನಾದ ಅರ್ಜುನ ಮತ್ತು ದುರ್ಯೋಧನರಿಗೆ ನೀಡಿದಂತೆ ನೀಡುತ್ತಿರುವನು.

ಜಗವನೆಲ್ಲವ ನಿರ್ಮಿಸುವ ನಾಲ್ಮೊಗನೊಳಗೆ ತಾನಿದ್ದು ಸಲಹುವ
ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ
ಸ್ವಗತ ಭೇದವಿವರ್ಜಿತನು ಸರ್ವಗ ಸದಾನಂದೈಕ ದೇಹನು
ಬಗೆಬಗೆಯ ನಾಮದಲಿ ಕರೆಸುತ ಭಕುತರನು ಪೊರೆವ ॥ ೮ ॥

ಶ್ರೀಹರಿಯು ಚತುರ್ಮುಖ ಬ್ರಹ್ಮನಲ್ಲಿ ನೆಲೆಸಿದ್ದು ಎಲ್ಲಾ ಜಗತ್ತನ್ನು ಸೃಷ್ಟಿಸುವನು. ವಿಷ್ಣುರೂಪದಿಂದ ತಾನೇ ಎಲ್ಲವನ್ನೂ ಸಲಹುವನು. ವ್ಯೋಮಕೇಶನಾದ ಶಿವನಲ್ಲಿ ನೆಲೆಸಿದ್ದು ಲೋಕಗಳನ್ನು ಸಂಹರಿಸುವನು. ಅವನು ಸ್ವಗತಭೇದವಿವರ್ಜಿತನು.

ಸರ್ವತ್ರ ಇರುವವನು. ಸದಾ ಆನಂದವನ್ನೇ ಮುಖ್ಯದೇಹವನ್ನಾಗಿ ಉಳ್ಳವನು. ಬಗೆಬಗೆಯ ಹೆಸರುಗಳಿಂದ ಕರೆಸುತ್ತಾ ಭಕ್ತರನ್ನು ಸಂರಕ್ಷಿಸುವನು.

ಒಬ್ಬನಲಿ ನಿಂತಾಡುವನು ಮತ್ತೊಬ್ಬನಲಿ ನೋಡುವನು ಬೇಡುವ
ನೊಬ್ಬನಲಿ ನೀಡುವನು ಮಾತಾಡುವನು ಬೆರಗಾಗಿ
ಅಬ್ಬರದ ಹೆದ್ದೈವನಿವ ಮತ್ತೊಬ್ಬರನು ಲೆಕ್ಕಿಸನು ಲೋಕದೊ-
ಳೊಬ್ಬನೇ ತಾ ಬಾಧ್ಯ ಬಾಧಕನಾಹ ನಿರ್ಭೀತ || ೯ ||

ಶ್ರೀಹರಿಯು ಒಬ್ಬನಲ್ಲಿ ನಿಂತು ಆಡುವನು. ಮತ್ತೊಬ್ಬನಲಿ ನಿಂತು ನೋಡುವನು. ಇನ್ನೊಬನಲ್ಲಿದ್ದು ಬೇಡುವನು. ಮತ್ತೊಬ್ಬನಲ್ಲಿದ್ದು ನೀಡುವನು. ಬೇರೊಬ್ಬನಲ್ಲಿದ್ದು ಬೆರಗಾಗಿ ಮಾತಾಡುವನು. ಅವನು ಅಬ್ಬರದ ಹಿರಿದಾದ ದೈವ. ಮೊತ್ತೊಬ್ಬರನ್ನು ಎಂದೂ ಲೆಕ್ಕಿಸದವನು. ಲೋಕದೊಳಗೆ ತಾನೊಬ್ಬನೇ ಬಾಧ್ಯನೂ, ಬಾಧಕನೂ ಆಗಿರುವನು. ಸರ್ವಥಾ ಭಯರಹಿತನು.

ಶರಣಜನಮಂದಾರ ಶಾಶ್ವತಕರುಣಿ ಕಮಲಾಕಾಂತ ಕಾಮದ
ಪರಮ ಪಾವನತರ ಸುಮಂಗಳಚರಿತ ಪಾರ್ಥಸಖ
ನಿರುಪಮಾನಂದಾತ್ಮ ನಿರ್ಗತ ದುರಿತದೇವ ವರೇಣ್ಯನೆಂದಾ-
ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ || ೧೦ ||

ಶ್ರೀಹರಿಯು ಭಕ್ತಜನರಿಗೆ ಮಂದಾರದಂತೆ ಸರ್ವಾಭೀಷ್ಟಪ್ರದಾಯಕ, ಸದಾ ಒಂದೇರೀತಿ ಇರುವವನು. ಕರುಣಾಳು, ಲಕ್ಷ್ಮೀಪತಿ, ಅಭೀಷ್ಟವನ್ನು ನೀಡುವವನು. ಸರ್ವೋತ್ತಮನೂ, ಅತ್ಯಂತಪಾವನನೂ, ಮಂಗಳಕರವಾದಂತಹ ಮಹಿಮೆಗಳನ್ನುಳ್ಳವನೂ, ಪಾಂಡವಸಖನೂ, ಸಾಟಿಯಿಲ್ಲದವನೂ, ಆನಂದಸ್ವರೂಪನೂ, ಸಕಲದೋಷರಹಿತನೂ, ಕ್ರೀಡಾದಿಗುಣ ವಿಶಿಷ್ಟನೂ,

ಭಜನೀಯನೂ ಎಂದು ತನ್ನ ಭಕ್ತರು ಭಕ್ತಿಯಿಂದ ಕರೆಯಲು ಅವನ ಬಳಿಗೆ ಬಂದು ಪಾಲಿಸುವನು.

ಜನನಿಯ ಕಾಣದಿಹ ಬಾಲಕ ನೆನೆನೆನೆದು ಹಲಬುತಿರೆ ಕತ್ತಲೆ
ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ
ತನಯನಂ ಬಿಗಿದಪ್ಪಿ ರಂಬಿಸಿ ಕನಲಿಕೆಯ ಕಳೆವಂತೆ ಮಧುಸೂ-
ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು ॥ ೧೧ ॥

ತಾಯಿಯನ್ನು ಕಾಣದಿಹ ಶಿಶುವು ಅವಳನ್ನು ನೆನೆನೆನೆದು ಹಲುಬುವಾಗ ಕತ್ತಲೆ ಮನೆಯಲ್ಲಿ ಬಚ್ಚಿಟ್ಟುಕೊಂಡು ಅವನನ್ನು ನೋಡುತ್ತಾ, ನಗುತ್ತಾ ಹರ್ಷದಿಂದ ಅವನ ಬಳಿಗೆ ಧಾವಿಸಿ ಬಿಗಿಯಾಗಿ ಅಪ್ಪಿಕೊಂಡು ಸಮಾಧಾನಪಡಿಸಿ ನೋವನ್ನು ಪರಿಹರಿಸುವಂತೆ, ಮಧುಸೂದನನಾದ ಶ್ರೀಹರಿಯು ತನ್ನ ಭಕ್ತರಿದ್ದಲ್ಲಿಗೆ ಬಂದೊದಗಿ ಸಲುಹುವನು.

ಇಟ್ಟಿಕಲ್ಲನು ಭಕುತಿಯಿಂದಲಿ ಕೊಟ್ಟ ಭಕುತಗೆ ಮೆಚ್ಚಿ ತನ್ನನೆ
ಕೊಟ್ಟ ಬಡಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ
ಕೆಟ್ಟಮಾತುಗಳೆನದೆ ಚೈದ್ಯನ ಪೊಟ್ಟೆಯೊಳಗಿಂಬಿಟ್ಟ ಬಾಣದ-
ಲಿಟ್ಟ ಭೀಷ್ಮನ ಅವಗುಣಗಳೆಣಿಸಿದನೆ ಕರುಣಾಳು ॥ ೧೨ ॥

ಕರುಣಾಳುವಾದ ಶ್ರೀಹರಿಯು ಇಟ್ಟಿಗೆ ಕಲ್ಲನ್ನು ಭಕ್ತಿಯಿಂದ ತನಗೆ ಕೊಟ್ಟ ಭಕ್ತನಿಗೆ ಮೆಚ್ಚಿ ತನ್ನನ್ನೇ ಕೊಟ್ಟ. ಬಡ ಬ್ರಾಹ್ಮಣನಾದ ಕುಚೇಲನ ಒಂದು ಹಿಡಿ ಅವಲಕ್ಕಿಗೆ ಒಲಿದು ಅಖಿಳ ಪುರುಷಾರ್ಥಗಳನ್ನು ನೀಡಿದ. ಕೆಟ್ಟ ಮಾತುಗಳೆನ್ನದೇ ತನ್ನನ್ನು ನಿಂದಿಸಿದ ಶಿಶುಪಾಲನನ್ನು ತನ್ನ ಹೊಟ್ಟೆಯೊಳಗೆ ಆಸರೆ ನೀಡಿ ಉದ್ಧರಿಸಿದ. ಕರುಣಾಳುವಾದ ಅವನು ಬಾಣಗಳಿಂದ ಹೊಡೆದ ಭೀಷ್ಮನ ಅವಗುಣಗಳನ್ನು ಎಣಿಸಿದನೇ?

ಧನವ ಸಂರಕ್ಷಿಸುವ ಫಣಿ ತಾನುಣದೆ ಮತ್ತೊಬ್ಬರಿಗೆ ಕೊಡದನು
ದಿನದಿ ನೋಡುತ ಸುಖಿಸುವಂದದಿ ಲಕ್ಷ್ಮೀವಲ್ಲಭನು
ಪ್ರಣತರನು ಕಾಯ್ದಿಹನು ನಿಷ್ಕಾಮನದಿ ನಿತ್ಯಾನಂದಮಯ ದು-
ರ್ಜನರ ಸೇವೆಯನೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೧೩ ॥

ನಿಧಿಯನ್ನು ಸಂರಕ್ಷಿಸುವ ಸರ್ಪ ಅದನ್ನು ತಾನೂ ಅಭವಿಸದೇ, ಮತ್ತೊಬ್ಬರಿಗೂ ನೀಡದೇ ಅನುದಿನದಲ್ಲಿ ನೋಡಿ ಸುಖಪಡುವಂತೆ, ಲಕ್ಷ್ಮೀಪತಿಯಾದ ಶ್ರೀಹರಿಯು ತನಗೆ ಶರಣು ಬಂದ ಭಕ್ತರನ್ನು ಯಾವುದೇ ಪ್ರತಿಫಲದ ಅಪೇಕ್ಷೆಯಿಲ್ಲದೇ ಕಾಯುತ್ತಿರುವನು. ಅವನು ಸದಾ ಆನಂದಮಯ, ಅವನು ಎಂದೂ ದುರ್ಜನರ ಸೇವೆಯನ್ನು ಮೆಚ್ಚನು. ಜಗತ್ತಿನಲ್ಲಿ ಅವನಿಗೆ ಸಾಟಿಯಾದವರೇ ಇಲ್ಲ.

ಬಾಲಕನ ಕಲಭಾಷೆ ಜನನಿಯು ಕೇಳಿ ಸುಖಪಡುವಂತೆ ಲಕ್ಷ್ಮೀ-
ಲೋಲ ಭಕುತರ ಮಾಡುತಿಹ ಸಂಸ್ತುತಿಗೆ ಹಿಗ್ಗುವನು
ತಾಳ ತನ್ನವರಲ್ಲಿ ಮಾಡುವ ಹೇಳನವ ಹೆದ್ದೈವ ವಿದುರನ
ಆಲಯದಿ ಪಾಲುಂಡು ಕುರುಪನ ಮಾನವನ ಕೊಂಡ ॥ ೧೪ ॥

ಚಿಕ್ಕ ಮಗುವಿನ ತೊದಲು ನುಡಿಯನ್ನು ತಾಯಿ ಕೇಳಿ ಆನಂದಪಡುವಂತೆ ಲಕ್ಷ್ಮೀಲೋಲನಾದ ಶ್ರೀಹರಿಯು ತನ್ನ ಭಕ್ತರು ಮಾಡುತ್ತಿರುವ ಉತ್ತಮ ಸ್ತೋತ್ರಕ್ಕೆ ಒಲೆಯುವನು. ಅವನು ತನ್ನ ಭಕ್ತರಲ್ಲಿ ಮಾಡುವ ಅವಹೇಳನವನ್ನು ಸಹಿಸನು. ಹಿರಿಯ ದೈವವಾದ ಅವನು ವಿದುರನ ಮನೆಯಲ್ಲಿ ಪಾಲುಂಡು ಕೌರವರ ಒಡೆಯನಾದ ದುರ್ಯೋಧನನ ಮಾನವನು ಕಳೆದನು.

ಸ್ಮರಿಸುವವರಪರಾಧಗಳ ತಾ ಸ್ಮರಿಸ ಸಕಲೇಷ್ಟಪ್ರದಾಯಕ
ಮರಳಿ ತನಗರ್ಪಿಸಲು ಕೊಟ್ಟದನಂತಮಡಿ ಮಾಡಿ
ಪರಿಪರಿಯಲಿಂದುಣಿಸಿ ಸುಖಸಾಗರದಿ ಲೋಲ್ಯಾಡಿಸುವ ಮಂಗಳ-
ಚರಿತ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ॥ ೧೫ ॥

ಶ್ರೀಹರಿಯು ತನ್ನನ್ನು ಸ್ಮರಿಸುವವರ ಅಪರಾಧಗಳನ್ನು ತಾನು ಸ್ಮರಿಸನು. ಸಕಲೇಷ್ಟಗಳನ್ನು ನೀಡುವ ಅವನು ತಾನು ಕೊಟ್ಟದ್ದನ್ನು ಮರಳಿ ತನಗರ್ಪಿಸಲು ಅದನ್ನು ಅನಂತ ಪಟ್ಟು ಮಾಡಿ ಭಕ್ತರಿಗೆ ನೀಡಿ ಬಗೆಬಗೆಯಲ್ಲಿ ಅವರಿಗೆ ಉಣಿಸಿ ಸುಖಸಾಗರದಲ್ಲಿ ಓಲಾಡಿಸುವನು. ಅವನು ಮಂಗಳಚರಿತ್ರ. ಜ್ಞಾನಮಯದೇಹನು, ಲೋಕಪವಿತ್ರ ಮತ್ತು ಸುಚರಿತ್ರ.

ಏನು ಕರುಣಾನಿಧಿಯೋ ಹರಿ ಮತ್ತೇನು ಭಕಾಧೀನನೋ
ಇನ್ನೇನು ಈತನ ಲೀಲೆ ಇಚ್ಛಾಮಾತ್ರದಲಿ ಜಗವ
ತಾನೆ ಸೃಜಿಸುವ ಪಾಲಿಸುವ ನಿರ್ವಾಣ ಮೊದಲಾದಖಿಳ ಲೋಕ
ಸ್ಥಾನದಲಿ ಮತ್ತವರನಿಟ್ಟಾನಂದಬಡಿಸುವನು ॥ ೧೬ ॥

ಶ್ರೀಹರಿಯು ಎಷ್ಟು ಕರುಣಾನಿಧಿಯೋ ಮತ್ತೆಷ್ಟು ಭಕ್ತಾಧೀನನೋ, ಇವನ ಲೀಲೆ ಇನ್ನೆಷ್ಟು ಬಗೆಯದೋ ಅವನು ತನ್ನ ಇಚ್ಛಾಮಾತ್ರದಿಂದಲೇ ಜಗತ್ತನ್ನು ತಾನೇ ಸೃಷ್ಟಿಸುವನು, ಸಂರಕ್ಷಿಸುವನು. ತನ್ನವರನ್ನು ವೈಕುಂಠ ಮೊದಲಾದ ಸಕಲ ಲೋಕಸ್ಥಾನದಲ್ಲಿಟ್ಟು ಆನಂದಪಡಿಸುವನು.

ಜನಪ ಮೆಚ್ಚಿದರೀವ ಧನವಾಹನ ವಿಭೂಷಣ ವಸನ ಭೂಮಿಯ
ತನು ಮನೆಗಳಿತ್ತಾದರಿಪರುಂಟೇನೋ ಲೋಕದೊಳು
ಅನವರತ ನೆನೆವವರನಂತಾಸನವೆ ಮೊದಲಾದಾಲಯದಲಿ–
ಟ್ಟಣುಗಲಂದದಲವರ ವಶನಾಗುವ ಮಹಾಮಹಿಮ ॥ ೧೭ ॥

ರಾಜನು ಮೆಚ್ಚಿದರೆ ಧನವನ್ನೂ, ವಾಹನವನ್ನೂ, ಬಗೆಬಗೆಯ ಭೂಷಣಗಳನ್ನೂ, ವಸ್ತ್ರವನ್ನೂ, ಭೂಮಿಯನ್ನೂ ನೀಡಬಲ್ಲ. ಆದರೆ ತನ್ನ ದೇಹ, ಮನೆಗಳನ್ನೇ ನೀಡಿ ಆದರಿಸುವರು ಲೋಕದಲ್ಲಿ ಇರುವರೇ? ಶ್ರೀಹರಿಯು ತನ್ನನ್ನು ಸದಾ

ನೆನೆಯುವವರನ್ನು ಅನಂತಾಸನ ಮೊದಲಾದ ತನ್ನ ಮಂದಿರಗಳಲ್ಲಿರಿಸಿ, ಅವರಿಗೆ ಭೃತ್ಯನಂತೆ ವಶನಾಗುವ ಮಹಾಮಹಿಮನಾಗಿರುವನು.

ಭುವನಪಾವನಚರಿತ ಪುಣ್ಯಶ್ರವಣಕೀರ್ತನ ಪಾಪನಾಶನ
ಕವಿಭಿರೀಡಿತ ಕೈರವದಳಶ್ಯಾಮ ನಿಸ್ಸೀಮ
ಯುವತಿ ವೇಷದಿ ಹಿಂದೆ ಗೌರೀಧವನ ಮೋಹಿಸಿ ಕೆಡಿಸಿ ಉಳಿಸಿದ
ಇವನ ಮಾಯವ ಗೆಲುವನಾವನು ಈ ಜಗತ್ತ್ರಯದಿ ॥ ೧೮ ॥

ಶ್ರೀಹರಿಯು ಲೋಕಗಳನ್ನೇ ಪಾವನಗೊಳಿಸುವ ಪುಣ್ಯ ಚರಿತ್ರನು. ಪುಣ್ಯ ನೀಡುವ ಶ್ರವಣ ಹೊಂದಿದವನು. ಪುಣ್ಯ ನೀಡುವ ಕೀರ್ತನೆ ಉಳ್ಳವನು. ಪಾಪನಾಶಕನು. ಜ್ಞಾನಿಗಳಿಂದ ಸ್ತುತ್ಯನು. ಕನ್ನೈದಿಲೆಯಿಂದ ಶ್ಯಾಮಲವರ್ಣನು. ಪರಿಮಿತಿ ಇಲ್ಲದವನು. ಅವನು ಹಿಂದೆ ಮೋಹಿನಿ ವೇಷದಿಂದ ಗೌರೀಪತಿಯಾದ ಶಿವನನ್ನು ಮೊಹಗೊಳಿಸಿ, ಕೆಡಿಸಿ ಉಳಿಸಿದನು. ಈ ಮೂರು ಲೋಕದಲ್ಲಿ ಇವನ ಮಾಯೆಯನ್ನು ಗೆಲ್ಲುವವವು ಯಾವನು?

ಪಾಪಕರ್ಮವ ಸಹಿಸುವರೆ ಲಕ್ಷ್ಮೀಪತಿಗೆ ಸಮರಾದ ದಿವಿಜರ-
ನೀ ಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ
ಗೋಪ ಗುರುವಿನ ಮಡದಿ ಭೃಗು ನಗಚಾಪ ಮೊದಲಾದವರು ಮಾಡ್ದ ಮ
ಹಾಪರಾಧಗಳೆಣಿಸದನೆ ಕರುಣಾಸಮುದ್ರ ಹರಿ ॥ ೧೯ ॥

ಪಾಪಕರ್ಮವನ್ನು ಸಹಿಸುವಲ್ಲಿ ಲಕ್ಷ್ಮೀಪತಿಯಾದ ಶ್ರೀಹರಿಗೆ ಸಮರಾದ ದೇವತೆಗಳನ್ನು ಈ ಬ್ರಹ್ಮಾಂಡದೊಳಗೆ ಎಲ್ಲಿಯೂ ನಾನು ಕಾಣೆನು. ಗೋಪ, ಗುರುವಿನ ಮಡದಿ, ಭೃಗು, ನಗಚಾಪನಾದ ಶಿವ ಮೊದಲಾದವರು ಮಾಡಿದ ಮಹಾಪರಾಧಗಳನ್ನು ಅವನು ಎಣಿಸಿದನೇ? ಅವನೇ ಕರುಣಾಸಮುದ್ರ ಶ್ರೀಹರಿ.

ಅಂಗುಟಾಗ್ರದಿ ಜನಿಸಿದ ಮರತರಂಗಿಣಿಯು ಲೋಕತ್ರಯಗಳಘ
ಹಿಂಗಿಸುವಳವ್ಯಾಕೃತಾಕಾಶಾಂತವ್ಯಾಪಿಸಿದ ಇಂಗಡಲಮಗಳ್ರೆಡೆಯನಂ
ಗೋಪಾಂಗಗಳಲಿಪ್ಪ ಮಲನಚಿತ
ಸುಮಂಗಳಪ್ರದ ನಾಮ ಪಾವನಮಾಳ್ಪದೇನರಿದು ॥ ೨೦ ॥

ಶ್ರೀಹರಿಯ ಪಾದದ ಹೆಬ್ಬರಳ ತುದಿಯಿಂದ ಹುಟ್ಟಿದ ದೇವನದಿಯಾದ ಗಂಗೆಯು ಮೂರು ಲೋಕಗಳ ಪಾಪಗಳನ್ನು ಪರಿಹರಿಸುವಳು. ಅವ್ಯಾಕೃತಾಕಾಶದ ಕೊನೆಯವರೆಗೂ ವ್ಯಾಪಿಸಿರುವ ಆ ಲಕ್ಷ್ಮೀಪತಿಯಾದ ಶ್ರೀಹರಿಯ ಅಂಗ ಉಪಾಂಗಗಳಲ್ಲಿ ಇವರು ನಿರ್ಮಲವಾದ ಅನಂತ ಸನ್ಮಂಗಲವನ್ನು ಕರುಣಿಸುವಂತಹ ನಾಮಗಳು ಪಾವನ ಮಾಡದಿರುವದೇ?

ಕಾಮಧೇನುಸುಕಲ್ಪತರು ಚಿಂತಾಮಣಿಗಳಮರೇಂದ್ರಲೋಕದಿ
ಕಾಮಿತಾರ್ಥಗಳೀವವಲ್ಲದೇ ಸೇವೆ ಮಾಳ್ಪರಿಗೆ
ಶ್ರೀಮುಕುಂದನ ಪರಮಮಂಗಳ ನಾಮ ನರಕಸ್ಥರನು ಸಲಹಿತು
ಪಾಮರರ ಪಂದಿತರೆನಿಸಿ ಪುರುಷಾರ್ಥ ಕೊಡುತಿಹುದು ॥ ೨೧ ॥

ಸ್ವರ್ಗಲೋಕದಲ್ಲಿ ಕಾಮಧೇನು, ಕಲ್ಪತರು ಮತ್ತು ಚಿಂತಾಮಣಿಗಳು ತಮ್ಮ ಸೇವೆಯನ್ನು ಮಾಡುವವರಿಗೆ ಕಾಮಿತಾರ್ಥಗಳನ್ನು ಕೊಡುತ್ತವೆ. ಇತರರಿಗಲ್ಲ. ಆದರೆ ಮೋಕ್ಷದಾಯಕನಾದ ಶ್ರೀಹರಿಯ ಪರಮ ಮಂಗಳನಾಮ ನರಕದಲ್ಲಿದ್ದವರನ್ನೂ ರಕ್ಷಿಸಿತು. ಅಜ್ಞರನ್ನು ಜ್ಞಾನಿಗಳೆನ್ನಿಸಿ ಪುರುಷಾರ್ಥವನ್ನು ಕೊಡುತ್ತಿರುವುದು.

ಮನದೊಳಗೆ ಸುಂದರ ಪದಾರ್ಥವ ನೆನೆದು ಕೊಡೆ ಕೈಕೊಂಡು ಬಲು ನೂ
ತನ ಸುಶೋಭಿತಗಂಧಸುರಸೋಪೇತ ಫಲರಾಶಿ
ದ್ಯುನದಿನಿವಹಗಳಂತೆ ಕೊಟ್ಟವರನು ಸದಾ ಸಂತೈಸುವನು ಸ–

ದ್ಗುಣವ ಕದ್ದವರಘವ ಕದಿವನು ಅನಘನೆಂದೆನಿಸಿ ॥ ೨೨ ॥
ಮನಸ್ಸಿನಲ್ಲಿ ಸುಂದರ ಪದಾರ್ಥಗಳನ್ನು ನೆನೆದು ಅದನ್ನು ಸಮರ್ಪಿಸಿದರೇ ಶ್ರೀಹರಿಯು ಅವುಗಳನ್ನು ಸ್ವೀಕರಿಸಿ ಅತ್ಯಂತನೂತನವಾದ, ಕಂಗೊಳಿಸುವಂತಹ ಗಂಧ, ರಸ ಮೊದಲಾದವುಗಳಿಂದ ಕೂಡಿದ ಫಲರಾಶಿಯನ್ನು ಗಂಗಾಪ್ರವಾಹಗಳಂತೆ ಕೊಟ್ಟು ಅಂತಹಾ ಭಕ್ತರನ್ನು ಸದಾ ಸಂರಕ್ಷಿಸುವನು. ಸದ್ಗುಣವನ್ನು ಕದ್ದವರ ಪಾಪವನ್ನು ಶ್ರೀಹರಿಯು ತಾನು ಸ್ವತಃ ಅನಘನೆಂದೆನಿಸಿ ಪರಿಹರಿಸುವನು.

ಚೇತನಾಚೇತನವಿಲಕ್ಷಣ ನೂತನಪದಾರ್ಥದೊಳಗೆ ಬಲು
ನೂತನತಿಸುಂದರಕೆ ಸುಂದರ ರಸಕೆ ರಸ ರೂಪ
ಜಾತರೂಪೋದರ ಭವಾದ್ಯರೊಳಾತತಪ್ರತಿಮ ಪ್ರಭಾವ ಧ-
ರಾತಳದೊಳೆಮ್ಮೊಡನೆಯಾಡುತಲಿಪ್ಪ ನಮ್ಮಪ್ಪ ॥ ೨೩ ॥
ಶ್ರೀಹರಿಯು ಸಕಲ ಚೇತನಗಳಿಗಿಂತಲೂ, ಅಚೇತನಗಳಿಗಿಂತಲೂ ಅತ್ಯಂತ ವಿಲಕ್ಷಣನಾದವನು. ಅತ್ಯಂತ ನೂತನಪದಾರ್ಥಗಳೊಳಗೂ ಅತ್ಯಂಅ ನೂತನನು. ಅತಿ ಸುಂದರ ಪದಾರ್ಥಗಳಲ್ಲೂ ಶ್ರೀಹರಿಯು ಅತ್ಯಂತ ಸುಂದರನು. ಶ್ರೀಹರಿಯು ಸಕಲ ರಸಗಳಿಗೂ ಅತ್ಯಂತ ಶ್ರೇಷ್ಠ ರಸರೂಪನು. ಶ್ರೀಹರಿಯು ಹಿರಣ್ಯಗರ್ಭನಾದ ಬ್ರಹ್ಮ, ಶಿವ ಮೊದಲಾದವರೊಳಗೆ ವ್ಯಾಪಿಸಿರುವ ಅನುಪಮ ಸಾಮರ್ಥ್ಯವುಳ್ಳವನು. ನಮಗೆಲ್ಲರಿಗೂ ಜನಕನು. ಈ ಭೂಮಿಯಲ್ಲಿ ಶ್ರೀಹರಿಯು ನಮ್ಮೊಂದಿ ವಿಹರಿಸುತ್ತಿರುವನು.

ತಂದೆತಾಯ್ಗಳು ತಮ್ಮ ಶಿಶುವಿಗೆ ಬಂದ ಭಯಗಳ ಪರಿಹರಿಸಿ ನಿಜ
ಮಂದಿರದಿ ಬೇಡಿದುದನಿತ್ತಾದರಿಸುವಂದದಲಿ
ಹಿಂದೆಮುಂದೆಡ ಬಲದಿ ಒಳಹೊರಗಿಂದಿರೇಶನು ತನ್ನವರನೆಂ-

ದೆಂದು ಸಲಹುವ ಆಗಸದವ್ೋಲೆತ್ತ ನೋಡಿದರು ॥ ೨೪ ॥

ತಂದೆ ತಾಯಿಗಳು ತಮ್ಮ ಮಗುವಿಗೆ ಬರುವ ಭಯಗಳನ್ನು ಪರಿಹರಿಸಿ ತಮ್ಮ ಮನೆಯಲ್ಲಿ ಅದು ಬೇಡಿದುದನ್ನು ನೀಡಿ ಆದರದಂತೆ ಕಾಣುವಂತೆ ಇಂದಿರಾಅತಿಯಾದ ಶ್ರೀಹರಿಯು ತನ್ನ ಭಕ್ತರನ್ನು ಆಕಾಶದಂತೆ ಹಿಂದೆ, ಮುಂದೆ, ಎಡ, ಬಲಗಳಲ್ಲಿ, ಒಳ, ಹೊರಗೆ ಸದಾ ಎಲ್ಲಿ ನೋಡಿದರೂ ಕಾಪಾಡುತ್ತಿರುವನು.

ಒಡಲ ನೆಳಲಂದದಲಿ ಹರಿ ನಮ್ಮೊಡನೆ ತಿರುಗುವ ಒಂದರೆಕ್ಷಣ
ಬಿಡದೆ ಬೆಂಬಲನಾಗಿ ಭಕ್ತಾಧೀನನೆಂದೆನಿಸುವನು
ತಡೆವ ದುರಿತೌಘಗಳ ಕಾಮದ ಕೊಡುವ ಸಕಲೇಷ್ಟಗಳ ಸಂತತ
ನಡೆವ ನಮ್ಮಂದದಲಿ ನವಸುವಿಶೇಷ ಸನ್ಮಹಿಮಾ ॥ ೨೫ ॥

ಶ್ರೀಹರಿಯು ನಮ್ಮೊಂದಿಗೆ ದೇಹದ ನೆರಳಿನಂತೆ ಒಂದರೆಕ್ಷಣವೂ ಬಿಡದೇ ಬೆಂಬಲವಾಗಿದ್ದು ಭಕ್ತಾಧೀನ ಎಂದೆನಿಸಿ ತಿರುಗುತ್ತಿರುವನು. ಶ್ರೀಹರಿಯು ದುರಿತರಾಶಿಗಳನ್ನು ಪರಿಹರಿಸುವನು. ಕಾಮನೆಗಳನ್ನು ನೀಡುವ ಶ್ರೀಹರಿಯು ನಮ್ಮ ಸಕಲೇಷ್ಟಗಳನ್ನೂ ಸದಾ ಪೂರೈಸುತ್ತಿರುವನು. ಸರ್ವತ್ರಾವ್ಯಾಪ್ತನು. ಬಗೆಬಗೆಯ ವಿಶೇಷಗಳಿಂದ ಕೂಡಿದ ಅಪಾರರಹಿತನೂ ಆದ ಶ್ರೀಹರಿಯು ಸದಾ ನಮ್ಮ ಜೊತೆಗೆ ಅನುಕೂಲವಾಗಿಯೇ ಇರುವನು.

ಬಿಟ್ಟವರ ಪಾಶದಿಂದಲಿ ಕಟ್ಟುವನು ಬಹುಕಠಿಣನಿವ
ಶಿಷ್ಟೇಷ್ಟನೆಂದರಿದನವರತ ಸದ್ಭಕ್ತಿ ಪಾಶದಲಿ
ಕಟ್ಟುವರ ಭವಕಟ್ಟು ಬಿಡಿಸುವ ಸಿಟ್ಟಿನವನಿವನಲ್ಲ ಕಾಮದ
ಕೊಟ್ಟು ಕಾವನು ಸಕಲ ಸೌಖ್ಯವನಿಹಪರಂಗಳಲಿ ॥ ೨೬ ॥

ಶ್ರೀಹರಿಯು ತನ್ನನ್ನು ಬಿಟ್ಟವರನ್ನು ಸಂಸಾರ ಪಾಶದಿಂದ ಕಟ್ಟಿ ಹಾಕುವನು. ಇವನು ಬಹು ಕಠಿಣ. ಸಜ್ಜನರಿಗೆ ಇಷ್ಟನಾಗಿ ಇರುವವನು ಎಂದು ತಿಳಿದು ಉತ್ತಮ

ಭಕ್ತಿಯೆಂಬ ಪಾಶದಿಂದ ತನ್ನನ್ನು ಕಟ್ಟುವವರ ಸಂಸಾರದ ಕಟ್ಟನ್ನು ಬಿಡಿಸುವನು. ಶ್ರೀಹರಿಯು ಸಿಟ್ಟು ಮಾಡಿಕೊಳ್ಳುವವನಲ್ಲ. ಕಾಮದನಾದ ಶ್ರೀಹರಿಯು ಸಕಲ ಸೌಖ್ಯಗಳನ್ನು ಇಹಪರಗಳಲ್ಲಿ ಕೊಟ್ಟು ಸಲಹುವನು.

ಕಣ್ಣಿಗೆವೆಯಂದದಲಿ ಕೈ ಮೈ ತಿಣ್ಣಿಗೊದಗುವ ತೆರದಿ ಪಲ್ಗಳು
ಪಣ್ಣುಫಲಗಳನಗಿದು ಜಿಹ್ವೆಗೆ ರಸವನೀವಂತೆ
ಪುಣ್ಯಫಲಗಳನೀಡುವುದಕೆ ನುಡಿವೆಣ್ಣಿನಾಣ್ಮಂಡದೊಳು ಲಕ್ಷ್ಮಣ
ನಣ್ಣನೊದಗುವ ಭಕ್ತರವಸರರಮರಗಣಸಹಿತ ॥ ೨೭ ॥

ಕಣ್ಣುಗಳಿಗೆ ರೆಪ್ಪೆಗಳಂತೆ, ಕೈ ಮೈ ತಿನಿಸಿಗೊದಗುವ ರೀತಿಯಲ್ಲಿ ಹಲ್ಲುಗಳಲ್ಲಿ ಪಕ್ವವಾದ ಫಲಗಳನ್ನಗಿದು ನಾಲಿಗೆಗೆ ರಸವನ್ನು ನೀಡುವಂತೆ, ಪುಣ್ಯ ಫಲವನ್ನು ನೀಡುವಂತೆ ಬ್ರಹ್ಮಾಂಡದಲ್ಲಿ ಲಕ್ಷ್ಮಣನ ಅಣ್ಣನಾದ ಶ್ರೀರಾಮನಾದ ಶ್ರೀಹರಿಯು ಭಕ್ತರ ರಕ್ಷಣೆಯ ಪ್ರಸಂಗ ಒದಗಿದಾಗಲೆಲ್ಲಾ ದೇವತೆಗಳ ಸಮೂಹದೊಂದಿಗೆ ಬಂದೊದಗುವನು.

ಕೊಟ್ಟದನು ಕೈಗೊಂಬರಕ್ಷಣ ಬಿಟ್ಟಗಲ ತನ್ನವರ ದುರಿತಗ
ಳಟ್ಟುವನು ದೂರದಲಿ ದುರಿತಾರಣ್ಯಪಾವಕನು
ಬೆಟ್ಟ ಬೆನ್ನಲಿ ಹೊರಿಸಿದವರೊಳು ಸಿಟ್ಟು ಮಾಡಿದನೇನೋ ಹರಿ ಕಂ
ಗೆಟ್ಟ ಸುರರಿಗೆ ಸುಧೆಯನುಣಿಸಿದ ಮುರಿದನಹಿತರನಾ ॥ ೨೮ ॥

ಶ್ರೀಹರಿಯು ತನಗೆ ಸಮರ್ಪಿಸಿದ್ದನ್ನು ಸ್ವೀಕರಿಸುವನು. ತನ್ನ ಭಕ್ತರನ್ನು ಅರೆಕ್ಷಣವೂ ಬಿಟ್ಟಗಲನು. ಅವರ ದುರಿತಗಳನ್ನು ದೂರಕ್ಕೆ ಅಟ್ಟುವನು. ಶ್ರೀಹರಿಯು ದುರಿತವೆಂಬ ಅರಣ್ಯಕ್ಕೆ ಕಾಡ್ಗಿಚ್ಚಿನಂತೆ ಮಾರಕನು. ಬೆಟ್ಟವನ್ನು ತನ್ನ ಮೇಲೆ ಹೊರಿಸಿದ ದೇವತೆಗಳ ಬಗ್ಗೆ ಶ್ರೀಹರಿಯು ಕೋಪಗೊಂಡನೇ? ಬದಲಾಗಿ

ದಿಕ್ಕುತೋಚದಿದ್ದ ಸುರರಿಗೆ ಅಮೃತವನ್ನು ಉಣ್ಣಿಸಿ ಅವರ ವಿರೋಧಿಗಳಾದ ಅಸುರರನ್ನು ಸಂಹರಿಸಿದನು.

ಖೇದ ಮೋದ ಜಯಾಪಜಯ ಮೊದಲಾದ ದೋಷಗಳಿಲ್ಲ ಚಿನ್ಮಯಗೆ
ಸಾದರದಿ ತನ್ನಂಘ್ರಿಕಮಲವ ನಂಬಿ ತುತಿಸುವರ
ಕಾದುಕೊಂಡಿಹ ಪರಮಕರುಣಾಮಹೋದಧಿಯು ತನ್ನವರು ಮಾಡಿದಪ
ರಾಧಗಳ ನೋಡದಲೇ ಸಲಹುವ ಸರ್ವಕಾಮದನು ॥ ೨೯ ॥

ಶ್ರೀಹರಿಗೆ ವ್ಯಥೆ, ಮೋದ, ಗೆಲವು, ಸೋಲು ಮೊದಲಾದ ದೋಷಗಳು ಸರ್ವಥಾ ಇಲ್ಲ. ಶ್ರೀಹರಿಯು ಜ್ಞಾನಮಯ. ಭಕ್ತಿಯಿಂದ ತನ್ನ ಪಾದಕಮಲವನ್ನು ನಂಬಿ ಸ್ತುತಿಸುವವರನ್ನು ಶ್ರೀಹರಿಯು ಸದಾ ಕಾಯ್ದುಕೊಂಡಿರುವನು. ಪರಮಕರುಣಾಸಾಗರ. ತನ್ನ ಭಕ್ತರು ಮಾಡುವ ಅಪರಾಧಗಳನ್ನು ಮನ್ನಿಸಿ ಕಾಪಾಡುವ ಸರ್ವಾಭೀಷ್ಟಪ್ರದಾಯಕ ಶ್ರೀಹರಿ.

ಮೀನ ಕೂರ್ಮ ವರಾಹ ನರಪಂಚಾನನಾತುಳ ಶೌರ್ಯ ವಾಮನ
ರೇಣುಕಾತ್ಮಜ ರಾವಣಾರಿನಿಶಾಚರಧ್ವಂಸಿ
ಧೇನುಕಾಸುರ ಮಥನ ತ್ರಿಪುರವ ಹಾನಿಗೈಸಿದ ನಿಪುಣ ಕಲಿಮುಖ
ದಾನವರ ಸಂಹರಿಸಿ ಧರ್ಮದಿ ಕಾಯ್ದೀ ಸುಜನರನು ॥ ೩೦ ॥

ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ರೇಣುಕೆಯ ಪುತ್ರನಾದ ಪರಶುರಾಮ, ರಾವಣಾದಿ ರಾಕ್ಷಸರನ್ನು ಸಂಹರಿಸಿದ ಶ್ರೀರಾಮ, ಧೇನುಕಾಸುರರನ್ನು ಕೊಂದ ಶ್ರೀಕೃಷ್ಣ, ತ್ರಿಪುರನನ್ನು ಕೊಂದ ಬುದ್ಧ, ಕಲಿ ಮೊದಲಾದ ದಾನವರನ್ನು

ಸಂಹರಿಸಿದ ಕಲ್ಕಿ – ಈ ರೂಪಗಳಿಂದ ಶ್ರೀಹರಿಯು ಸಜ್ಜನರನ್ನು ಧರ್ಮದಿಂದ ಸಂರಕ್ಷಿಸಿರುವನು.

ಶ್ರೀಮನೋಹರ ಶಮಲವರ್ಜಿತ ಕಾಮಿತಪ್ರದ ಕೈರವದಳ
ಶ್ಯಾಮ ಶಬಲ ಶರಣ್ಯ ಶಾಶ್ವತ ಶರ್ಕರಾಕ್ಷಸಖಾ
ಸಾಮಸನ್ನುತ ಸಕಲಗುಣಗಣಧಾಮ ಶ್ರೀಜಗನ್ನಾಥವಿಠಲ
ನೀಮಹಿಯೊಳವತರಿಸಿ ಸಲಹಿದೆ ಸಕಲ ಸುಜನರನು ॥ ೩೧ ॥

ಶ್ರೀಹರಿಯು ಲಕ್ಷ್ಮೀಮನೋಹರನೂ, ಸಕಲ ದೋಷದೂರನೂ, ಸರ್ವಕಾಮಿತಗಳನ್ನು ನೀಡುವವನೂ, ಕನ್ನೈದಿಲೆಯ ದಳದಂತೆ ಮನೋಹರನೂ, ಬಗೆಬಗೆಯ ವರ್ಣಗಳಿಂದ ಕೂಡಿರುವದರಿಂದ ಶಬಲನೂ, ಭಕ್ತರಿಗೆ ಆಸರೆಯಾದವನೂ, ಸದಾ ಒಂದೆ ತೆರನಾಗಿ ಇರುವವನೂ, ಶರ್ಕರಾಕ್ಷರು ಎಂಬ ಸೂಕ್ಷ್ಮಜ್ಞಾನಿಗಳಿಗೆ ಹಿತೈಷಿಯೂ, ಸಾಮವೇದದಿಂದಲೂ, ಸಾಮಗಳಿಂದಲೂ ಚೆನ್ನಾಗಿ ಸ್ತುತನಾದವನೂ, ಸಕಲಗುಣಗಣಗಳಿಗೂ ಮುಖ್ಯ ನೆಲೆಯಾದವನೂ, ಅಂತಹಾ ಶ್ರೀಜಗನ್ನಾಥವಿಠಲನಾದ ಶ್ರೀಹರಿಯು ಈ ಭೂಮಿಯಲ್ಲಿ ಅವತರಿಸಿ ಸಕಲ ಸಜ್ಜನರನ್ನೂ ಪಾಲಿಸಿದನು.